# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 899 |
| 2 | ಸದಸ್ಯರ ಹೆಸರು | : | ಶ್ರೀ.ರಘುನಾಥ್ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 12.03.2020 |
| 4 | ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿರವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಕಳೆದ 3 ವರ್ಷಗಳಲ್ಲಿ ಬೀದರ್ ಜಿಲ್ಲೆಗೆ ಬಿಡುಗಡೆಯಾದ ಅನುದಾನವೆಷ್ಟು: ಬಿಡುಗಡೆಯಾಗದೇ ಇರುವ ಅನುದಾನವೆಷ್ಟು: (ವರ್ಷವಾರು, ವಿಧಾನ ಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಯ ವತಿಯಿಂದ ಬೀದರ್ ಜಿಲ್ಲೆಗೆ ಕಳೆದ 3 ವರ್ಷಗಳಿಂದ ಬಿಡುಗಡೆಯಾದ ಅನುದಾನದ ವಿವರ ಈ ಕೆಳಗಿನಂತಿದೆ.<br>(ರೂ.ಕೋಟಿಗಳಲ್ಲಿ)<br>ವರ್ಷ \| ಮಂಡಳಿಯಿಂದ ಬಿಡುಗಡೆಯಾದ ಅನುದಾನ \| ಬಿಡುಗಡೆ ಯಾಗದ ಅನುದಾನ<br>1 \| 2 \| 3<br>2016-17 \| 125.11 \| -<br>2017-18 \| 66.38 \| -<br>2018-19 \| 173.47 \| -<br>ಅನುಷ್ಠಾನಾಧಿಕಾರಿಗಳ ಕಾಮಗಾರಿವಾರು ಬೇಡಿಕೆ ಅನುಗುಣವಾಗಿ 3ನೇ ತಂಡದ ತಪಾಸಣಾ ವರದಿ ಹಾಗೂ ಛಾಯ ಚಿತ್ರ ಪಡೆದು ಅನುಷ್ಠಾನಾಧಿವಾರು RTGS ಮುಖಾಂತರ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ವಿಧಾನ ಸಭಾ ಕ್ಷೇತ್ರವಾರು ಅನುದಾನ ಬಿಡುಗಡೆ ಮಾಡಿರುವುದಿಲ್ಲ. |
| ಆ) | ಬಾಕಿ ಇರುವ ಅನುದಾನವನ್ನು ಎಷ್ಟು ದಿನಗಳೊಳಗಾಗಿ ಬಿಡುಗಡೆ ಮಾಡಲಾಗುವುದು: | ಉದ್ಭವಿಸುವುದಿಲ್ಲ |
| ಇ) | ಬಿಡುಗಡೆಯಾದ ಅನುದಾನದಲ್ಲಿ ಯಾವ ಯಾವ ವಿಧಾನ ಸಭಾ ಕ್ಷೇತ್ರಕ್ಕೆ ಎಷ್ಟೆಷ್ಟು ಅನುದಾನ ನೀಡಲಾಗಿದೆ: ಇದರಲ್ಲಿ ಕೈಗೊಂಡ ಕಾಮಗಾರಿಗಳು ಯಾವುವು; (ಸ್ಪಷ್ಟ ಮಾಹಿತಿ ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಯ ಅನುದಾನವು ಡಾ: ನಂಜುಂಡಪ್ಪಾ ವರದಿ ಅನುಸಾರ CDI ಸೂಚ್ಯಾಂಕ ಆಧಾರದ ಮೇಲೆ ತಾಲ್ಲೂಕನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಮೈಕ್ರೋ ಯೋಜನೆಯಲ್ಲಿ ಅನುದಾನ ತಾಲ್ಲೂಕವಾರು ಹಂಚಿಕೆ ಮಾಡಲಾಗಿದೆ ಮತ್ತು ಮ್ಯಾಕ್ರೋ ಯೋಜನೆಯಡಿ ಜಿಲ್ಲಾವಾರು ಅನುದಾನ ಹಂಚಿಕೆ ಮಾಡಲಾಗಿದೆ ವಿಧಾನ ಸಭಾ ಕ್ಷೇತ್ರವಾರು ಅನುದಾನ ನೀಡಿರುವುದಿಲ್ಲ.<br><br>ಕಳೆದ ಮೂರು ವರ್ಷಗಳಿಂದ (2016-17, 2017-18 ಹಾಗೂ 2018-19) ಬೀದರ್ ಜಿಲ್ಲೆಗೆ 2016-17ನೇ ಸಾಲಿಗೆ ರೂ.99.95ಕೋಟಿ ಮೊತ್ತದ 747 ಕಾಮಗಾರಿಗಳು, 2017-18ನೇ ಸಾಲಿನಲ್ಲಿ ರೂ214.92ಕೋಟಿ ಮೊತ್ತದ 513 ಕಾಮಗಾರಿಗಳನ್ನು ಹಾಗೂ 2018-19ನೇ ಸಾಲಿಗೆ ರೂ.141.30ಕೋಟಿ ಮೊತ್ತದ 465 ಕಾಮಗಾರಿಗಳನ್ನು ತೆಗೆದುಕೊಳ್ಳಲಾಗಿದೆ. ತಾಲ್ಲೂಕುವಾರು ವಿವರ ಅನುಬಂಧ-1ರಲ್ಲಿ ನೀಡಲಾಗಿದೆ |

| | ಪ್ರಶ್ನೆ | ಉತ್ತರ |
|---|---|---|
| ಈ) | ಪ್ರಸಕ್ತ ಸಾಲಿನಲ್ಲಿ ಕೈಗೊಳ್ಳಲಿರುವ ಕಾಮಗಾರಿಗಳು ಯಾವುವು; ಕಾಮಗಾರಿಗಳು ಯಾವ ಹಂತದಲ್ಲಿದೆ; (ಮಾಹಿತಿ ನೀಡುವುದು) | ಪ್ರಸಕ್ತ ಸಾಲಿನ ಅಂದರೆ 2019-20ನೇ ಸಾಲಿನಲ್ಲಿ<br><br>1) ಸಾಮಾಜಿಕ ವಲಯದಲ್ಲಿ : ಶಾಲಾ/ಕಾಲೇಜುಗಳಿಗೆ /ಪದವಿ ಕಾಲೇಜುಗಳಿಗೆ ಹೆಚ್ಚುವರಿ ಕೋಣೆಗಳ /ಕಟ್ಟಡಗಳ ನಿರ್ಮಾಣ ಅಂಗನವಾಡಿ ನಿರ್ಮಾಣ ಗ್ರಂಥಾಲಯ ಗಳ ನಿರ್ಮಾಣ, ಎ.ಎನ್.ಎಂ., ಪಿ.ಹೆಚ್.ಸಿ, ಸಿ.ಹೆಚ್.ಸಿ ತಾಲ್ಲೂಕು ಆಸ್ಪತ್ರೆ, ಜಿಲ್ಲಾ ಆಸ್ಪತ್ರೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು. ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಒಳಾಂಗಣ ಮತ್ತು ಹೊರಾಂಗಣ ಕ್ರೀಡಾಂಗಣಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು.<br>2) ಸಾಮಾಜಿಕೇತರ ವಲಯದಲ್ಲಿ ಸಿ.ಸಿ.ರಸ್ತೆ, ಡಾಂಬರೀಕರಣ ರಸ್ತೆ. ಸೇತುವ ಹಾಗೂ ಚರಂಡಿ ನಿರ್ಮಾಣ, ಕುಡಿಯುವ ನೀರು ಸರಬರಾಜು, ಕೆರೆಗಳ ನಿರ್ಮಾಣ ಮತ್ತು ಅಭಿವೃದ್ಧಿಗಾಗಿ ಕಾಮಗಾರಿಗಳನ್ನು ತೆಗೆದುಕೊಳ್ಳಲಾಗಿದೆ.<br><br>2019-20ನೇ ಸಾಲಿನಲ್ಲಿ ಬೀದರ್ ಜಿಲ್ಲೆಗೆ ಒಟ್ಟು ರೂ.432 ಕಾಮಗಾರಿಗಳಿಗೆ ಮಂಜೂರಾತಿ ನೀಡಲಾಗಿರುತ್ತದೆ. ಸದರಿ ಕಾಮಗಾರಿಗಳಲ್ಲಿ 18 ಕಾಮಗಾರಿಗಳು ಪೂರ್ಣಗೊಂಡಿರುತ್ತದೆ. 248 ಕಾಮಗಾರಿಗಳು ಪ್ರಗತಿಯಲ್ಲಿದ್ದು, 166 ಕಾಮಗಾರಿಗಳು ಪ್ರಾರಂಭಿಸಬೇಕಾಗಿರುತ್ತದೆ. |

| ವರ್ಷ | ಜಿಲ್ಲೆಯ ಹೆಸರು | ಕಾಮಗಾರಿಗಳ ವಿವರ | ಪೂರ್ಣಗೊಂಡ ಕಾಮಗಾರಿಗಳು | ಪ್ರಗತಿಯಲ್ಲಿರುವ ಕಾಮಗಾರಿಗಳು | ಪ್ರಾರಂಭವಾಗದೆ ಇರುವ ಕಾಮಗಾರಿಗಳು |
|---|---|---|---|---|---|
| 2019-20 | ಬೀದರ್ | 432 | 18 | 248 | 166 |

**ಪಿಡಿಎಸ್/೦೧/ಹೆಚ್‌ಕೆಡಿ/2020**

ಬಿ.ಎಸ್. ಯಡಿಯೂರಪ್ಪ

**(ಬಿ.ಎಸ್.ಯಡಿಯೂರಪ್ಪ)**

ಮುಖ್ಯಮಂತ್ರಿ

ಅನುಬಂಧ-1

ಕಲ್ಯಾಣ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿ

ಬೀದರ್ ಜಿಲ್ಲೆಗೆ ತಾಲ್ಲೂಕುವಾರು ಅನುಮೋದನೆ ಹಾಗೂ ಹಂಚಿಕೆಯಾದ ವಿವರ

| ವರ್ಷ | ತಾಲ್ಲೂಕು | ಒಟ್ಟು ಕಾಮಗಾರಿ | ಹಂಚಿಕೆಯಾದ ಅನುದಾನ |
|---|---|---|---|
| 2016-17 | ಔರಾದ | 35 | 15.66 |
| | ಬಸವಕಲ್ಯಾಣ | 60 | 14.33 |
| | ಭಾಲ್ಕಿ | 29 | 29.94 |
| | ಬೀದರ್ | 47 | 17.44 |
| | ಹುಮನಾಬಾದ್ | 63 | 22.57 |
| | **ಒಟ್ಟು** | **747** | **99.94** |
| 2017-18 | ಔರಾದ | 72 | 36.97 |
| | ಬಸವಕಲ್ಯಾಣ | 162 | 49.59 |
| | ಭಾಲ್ಕಿ | 80 | 41.84 |
| | ಬೀದರ್ | 79 | 46.64 |
| | ಹುಮನಾಬಾದ್ | 120 | 39.86 |
| | **ಒಟ್ಟು** | **513** | **214.92** |
| 2018-19 | ಔರಾದ | 78 | 30.78 |
| | ಬಸವಕಲ್ಯಾಣ | 153 | 30.10 |
| | ಭಾಲ್ಕಿ | 52 | 26.01 |
| | ಬೀದರ್ | 80 | 26.15 |
| | ಹುಮನಾಬಾದ್ | 102 | 28.24 |
| | **ಒಟ್ಟು** | **465** | **141.30** |
| | **ಒಟ್ಟಾರೆ** | **1725** | **45617.92** |